# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1088 (962)
ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು
ಉತ್ತರಿಸುವ ದಿನಾಂಕ : 29.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿನ ಕೈಗಾರಿಕೆಗಳು ಪ್ರಸ್ತುತ ಚೀನಾ ದೇಶದಿಂದ ಎಷ್ಟು ಉತ್ಪನ್ನಗಳನ್ನು ಮತ್ತು ಬಿಡಿ ಸಾಮಾಗ್ರಿಗಳನ್ನು ಆಮದು ಮಾಡಿಕೊಳ್ಳುತ್ತಿವೆ; ಮತ್ತು ಅವುಗಳ ಮೊತ್ತವೆಷ್ಟು; (ವಿವರ ನೀಡುವುದು) | 2019-20ನೇ ಸಾಲಿನಲ್ಲಿ ರಾಜ್ಯದಲ್ಲಿ ಚೀನಾದಿಂದ ಒಟ್ಟು 3524 ಉತ್ಪನ್ನಗಳನ್ನು ಆಮದು ಮಾಡಿಕೊಂಡಿದ್ದು, ಈ ಉತ್ಪನ್ನಗಳ ಒಟ್ಟು ಮೌಲ್ಯ 2356 ಮಿಲಿಯನ್ ಯು.ಎಸ್. ಡಾಲರ್‌ಗಳಾಗಿರುತ್ತದೆ. ವಿವರ ಅನುಬಂಧದಲ್ಲಿ ಲಗತ್ತಿಸಿದೆ.<br>(ವಿವರವನ್ನು ಭಾರತ ಸರ್ಕಾರದ, ಡಿಜಿಸಿಐಎಸ್, ಕೋಲ್ಕತ್ತಾ ಇವರ ಜಾಲತಾಣದಿಂದ ಪಡೆಯಲಾಗಿದೆ). |
| ಆ | ಪ್ರಸ್ತುತ ಚೀನಾ ದೇಶದಿಂದ ಆಮದು ಪ್ರಕ್ರಿಯೆಗೆ ಕೇಂದ್ರ ಸರ್ಕಾರ ನಿರ್ಬಂಧ ವಿಧಿಸಿದಲ್ಲಿ ಅಥವಾ ಆಮದು ಶುಲ್ಕ ಹೆಚ್ಚಿಸಿದ್ದಲ್ಲಿ ರಾಜ್ಯದಲ್ಲಿನ ಕೈಗಾರಿಕೆಗಳ ಪರಿಸ್ಥಿತಿ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ; (ವಿವರ ನೀಡುವುದು) | ಆಮದು ಹಾಗೂ ರಫ್ತು ವಿಷಯಗಳ ಬಗ್ಗೆ ನಿರ್ಧಾರ ಕೇಂದ್ರ ಸರ್ಕಾರದ ವ್ಯಾಪ್ತಿಯಲ್ಲಿರುತ್ತದೆ. ಪ್ರಸ್ತುತ ಚೀನಾ ದೇಶದಿಂದ ಆಮದು ಪ್ರಕ್ರಿಯೆಗೆ ಹಾಲು ಮತ್ತು ಹಾಲು ಉತ್ಪನ್ನಗಳ ಹೊರತಾಗಿ ಬೇರೆ ಯಾವುದೇ ನಿರ್ಬಂಧವನ್ನು ಕೇಂದ್ರ ಸರ್ಕಾರ ಮಾಡಿರುವುದಿಲ್ಲ.<br>ಪ್ರಸ್ತುತ ಕೇಂದ್ರ ಸರ್ಕಾರದ ವತಿಯಿಂದ ಚೀನಾ ದೇಶವು ಸೇರಿದಂತೆ, ದೇಶಕ್ಕೆ ಆಮದಾಗುವ ಕೆಲವು ಉತ್ಪನ್ನಗಳಿಗೆ ಸಂಬಂಧಿಸಿದಂತೆ ಗುಣಮಟ್ಟದ ಬಗ್ಗೆ ಬಿ.ಐ.ಎಸ್.ನಿಂದ ಪ್ರಮಾಣಪತ್ರ ಪಡೆಯುವುದು ಹಾಗೂ ಆಮದಾಗುತ್ತಿರುವ ಉತ್ಪನ್ನಗಳಿಗೆ ಸಂಬಂಧಿಸಿದಂತೆ "ಸರ್ಟಿಫಿಕೇಟ್ ಆಫ್ ಓರಿಜಿನ್" ಪಡೆಯುವುದರ ಮೂಲಕ ಆಮದಾದ ಉತ್ಪನ್ನಗಳ ಮೂಲ ದೇಶದ ಮಾಹಿತಿಯನ್ನು ಸಂಗ್ರಹಿಸುವ ಬಗ್ಗೆ ಆದೇಶಿಸಿರುತ್ತದೆ.<br>ಮುಂಬರುವ ದಿನಗಳಲ್ಲಿ ಕಚ್ಚಾವಸ್ತುಗಳು ಮತ್ತು ಇತರೆ ಉತ್ಪಾದನೆಗೆ ಅವಶ್ಯ ಸಾಮಗ್ರಿಗಳ ಆಮದು ನಿಷೇಧಿಸಿದಲ್ಲಿ ಅಥವಾ ಆಮದು ಶುಲ್ಕವನ್ನು ಹೆಚ್ಚಿಸಿದಲ್ಲಿ ರಾಜ್ಯದಲ್ಲಿನ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವ ಬಗ್ಗೆ ಪರಿಶೀಲಿಸಬೇಕಾಗಬಹುದು. |
| ಇ | ಆಮದು ತಡೆ ಪ್ರಕ್ರಿಯೆಯಿಂದ ನಷ್ಟ ಅನುಭವಿಸುವ ಕೈಗಾರಿಕೆಗಳನ್ನು ಉತ್ತೇಜಿಸಿ, ನಿರುದ್ಯೋಗದ ಪ್ರಮಾಣವನ್ನು ಕಡಿಮೆ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮವೇನು? (ವಿವರ ನೀಡುವುದು) | ಪ್ರಸ್ತುತ ಆಮದು ಪ್ರಕ್ರಿಯೆ ತಡೆ ಹಿಡಿದಿರುವುದಿಲ್ಲವಾದ್ದರಿಂದ ಈ ಪ್ರಶ್ನೆ ಅನ್ವಯಿಸುವುದಿಲ್ಲ. |

ಸಿಐ 261 ಎಸ್‌ಪಿಐ 2020

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು